# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೧೪, ೨೦೧೪ (ಶ್ರಾವಣ ೨೩, ಶಕ ವರ್ಷ ೧೯೩೬)<br>Bangalore, Thursday, August 14, 2014 (Shravana 23, Shaka Varsha 1936) | ಸಂಚಿಕೆ ೩೩<br>Issue 33 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ, ಇವರನ್ನು ಅನಧಿಕೃತ ಗೈರು ಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ

**ಓದಲಾಗಿದೆ :**

1) ಜಿಲ್ಲಾಧಿಕಾರಿಗಳು, ಗುಲ್ಬರ್ಗ ಇವರ ಪತ್ರ ಸಂಖ್ಯೆ: ಕಂ/ಸಂಕೀರ್ಣ–2/ಸಿಆರ್/10–11, ದಿನಾಂಕ: 27–10–2010

2) ಸರ್ಕಾರದ ಪತ್ರ ಸಂಖ್ಯೆ: ಅಕುಕ 246 ಎಂಎಸ್‌ಎ 2010, ದಿನಾಂಕ: 3–12–2010

3) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪ್ರಸ್ತಾವನೆ ಸಂಖ್ಯೆ: ಡಿಪಿಜಿ/ಗುವಿ(2)/03/2011–12, ದಿನಾಂಕ: 23–05–2011

4) ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಕುಕ 74 ಎಂಎಸ್‌ಎ 2011, ದಿನಾಂಕ: 19–09–2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗ ಇವರು ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ, ಇವರು ದಿನಾಂಕ: 06–09–2010 ರಿಂದ 12–09–2010ರವರೆಗೆ ಹಾಗೂ ದಿನಾಂಕ: 19–09–2010 ರಿಂದ 26–09–2010 ರವರೆಗೆ ಆಕಸ್ಮಿಕ ರಜೆ ಸಲ್ಲಿಸಿ, ದಿನಾಂಕ: 27–09–2010 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ ಆರೋಪಕ್ಕೆ ಸಂಬಂಧಿಸಿದಂತೆ ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ ಇವರನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿರುತ್ತಾರೆ. ಹಾಗೂ ಸದರಿ ಕ್ರಮಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (2)ರ ಸರ್ಕಾರದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗ ಇವರು ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುವ ಕ್ರಮಕ್ಕೆ ಸರ್ಕಾರವು ಘಟನೋತ್ತರ ಅನುಮೋದನೆ ನೀಡಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (3)ರ ಪ್ರಸ್ತಾವನೆಯಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ ಇವರ ಅನಧಿಕೃತ ಗೈರು ಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿ ಮತ್ತು ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ಅವರಿಂದ ರಕ್ಷಣಾ ಹೇಳಿಕೆಯನ್ನು ಕೋರಿದ್ದು, ಆಪಾದಿತ ವೈದ್ಯರು ನೋಂದಾಯಿತ ಅಂಚೆಯ ಮೂಲಕ ಟಪಾಲನ್ನು ಸ್ವೀಕರಿಸಿದ್ದರೂ ಸರ್ಕಾರದಿಂದ ಹೊರಡಿಸಲಾದ ಕಾರಣ ಕೇಳುವ ಸೂಚನಾ ಪತ್ರಕ್ಕೆ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ವಿಜಯ ಎಸ್. ಸತ್ಯ ಇವರ ವಿರುದ್ಧ ಇಂಡಿಯನ್ ಏರ್‌ಲೈನ್ಸ್ ಲಿಮಿಟೆಡ್ ಮತ್ತಿತರರ ಪ್ರಕರಣದಲ್ಲಿ (ಪ್ರಕರಣದ ಸಂಖ್ಯೆ: ಎಸ್ ಎಲ್‌ಪಿ (ಸಿ) ಸಂಖ್ಯೆ: 24220–21/2007) ದಿನಾಂಕ: 06–09–2013ರಂದು ದೀರ್ಘಾವಧಿಯಿಂದ ಅನಧಿಕೃತ

ಗೈರುಹಾಜರಾಗಿರುವ ಪ್ರಕರಣಗಳಲ್ಲಿ ಯಾವುದೇ ಆದೇಶವಿಲ್ಲದೆ ಸ್ವಯಂಚಾಲಿತವಾಗಿ ಸೇವೆಯಿಂದ ತೆಗೆದುಹಾಕಬಹುದೆಂದು ತೀರ್ಪು ನೀಡಿರುತ್ತದೆ. ಸದರಿ ಆದೇಶದ ಉದ್ಧೃತ ಭಾಗವು ಈ ಕೆಳಕಂಡಂತಿರುತ್ತದೆ.

> ``It is a settled Law that an employee cannot be termed as a slave, he has a right to abandon the service any time voluntarily by submitting his resignation and alternatively, not joining the duty and remaining absent for long. Absence from duty in the beginning may be a misconduct but when absence is for a very long period, it may amount to voluntary abandonment of service and in that eventuality, the bonds of services comes to an end and automatically without requiring any order to be passed by the employer.

ಮುಂದುವರೆದು, In Jeevan Lal (1929) Limited V/S Workmen F ಪ್ರಕರಣದಲ್ಲಿ (AIR.P.1570 para 6) ಮಾನ್ಯ ಸರ್ವೋಚ್ಛ ನ್ಯಾಯಾಲಯವು ನೀಡಿರುವ ತೀರ್ಪಿನ ಉದ್ಧೃತ ಭಾಗ ಈ ಕೆಳಕಂಡಂತಿರುತ್ತದೆ.

> ``They would be the class of cases where long unauthorised absence may reasonably give rise to an inference that such service is intended to be abandoned by the employee."

ಸರ್ಕಾರವು ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಿ, ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ ಇವರು ಗುತ್ತಿಗೆ ಸೇವೆಯಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ದಿನಾಂಕ: 04–02–2010ರಿಂದ ಸಕ್ರಮಗೊಂಡು ಖಾಯಂಪೂರ್ವ ಸೇವಾ ಅವಧಿಯಲ್ಲಿಯೇ ಸರ್ಕಾರಿ ಕೆಲಸಕ್ಕೆ ದಿನಾಂಕ: 27–09–2010ರಿಂದ ಅಂದರೆ ಸುಮಾರು 04 ವರ್ಷಗಳಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಸರ್ಕಾರದ ಕಾರಣ ಕೇಳುವ ನೋಟೀಸಿಗೆ ವಿವರಣೆಯನ್ನು ನೀಡದೆ ಈವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದನ್ನು ಪರಿಗಣಿಸಿ, ಹಾಗೂ ಮಾನ್ಯ ಸರ್ವೋಚ್ಛ ನ್ಯಾಯಾಲಯದ ಮೇಲ್ಕಂಡ ಆದೇಶಗಳ ಹಿನ್ನಲೆಯಲ್ಲಿ ಸದರಿ ವೈದ್ಯರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 74 ಎಂಎಸ್ಎ 2011, ಬೆಂಗಳೂರು, ದಿನಾಂಕ: 29ನೇ ಮೇ, 2014**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಡಾ॥ ಅನಿಲ್ ಕುಮಾರ್ ಬಿ. ಪಟ್ಟಣ, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅಫಜಲ್‌ಪುರ, ಗುಲ್ಬರ್ಗ ಜಿಲ್ಲೆ ಇವರು ದಿನಾಂಕ: 27–09–2010ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿಗಳು 1977ರ ನಿಯಮ 6(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಾಮಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**PR 473**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಔಷಧ ನಿಯಂತ್ರಣ ಇಲಾಖೆಯ ಅಮಲುಜಾರಿ ವಿಭಾಗದ ಅಧಿಕಾರಿಗಳು ಸಂಚಾರಿ ದೂರವಾಣಿಯನ್ನು ಹೊಂದಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ :** ಔಷಧ ನಿಯಂತ್ರಣ ಇಲಾಖೆಯವರ ಪತ್ರ ಸಂಖ್ಯೆ: ಔನಿಇ/62/ಆವಿ–2/2012–13, ದಿನಾಂಕ: 09–04–2013 ಮತ್ತು 19–12–2013

**ಪ್ರಸ್ತಾವನೆ:**

ಔಷಧ ನಿಯಂತ್ರಕರು, ಮೇಲೆ ಓದಲಾದ ಪತ್ರಗಳಲ್ಲಿ ಔಷಧ ನಿಯಂತ್ರಣ ಇಲಾಖೆಯ ಎಲ್ಲಾ ಅಮಲುಜಾರಿ ವಿಭಾಗದ ಅಧಿಕಾರಿಗಳು ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ ಹಾಗೂ ಆಡಳಿತ ಸುಧಾರಣೆ ನಿಮಿತ್ತ ರಾಜ್ಯದಲ್ಲಿ ನಕಲಿ/ಕಲಬೆರಕೆ ಔಷಧಗಳನ್ನು ಪತ್ತೆ ಹಚ್ಚುವ ನಿಟ್ಟಿನಲ್ಲಿ ತನಿಖೆಯನ್ನು ಕೈಗೊಂಡು ಕಾನೂನು ಕ್ರಮ ಕೈಗೊಳ್ಳುತ್ತಿರುತ್ತಾರೆ. ಅಧಿಕಾರಿಗಳು ತನಿಖೆಯ ಸ್ಥಳಗಳಿಗೆ ತುರ್ತು ಭೇಟಿ ನೀಡಿ ಮಾಹಿತಿ ವಿನಿಮಯ ಮಾಡಿಕೊಳ್ಳುವ ನಿಟ್ಟಿನಲ್ಲಿ ಹಾಗೂ ಉತ್ತಮ ಗುಣಮಟ್ಟವಲ್ಲದ ಔಷಧಗಳು ಘೋಷಿತವಾದಾಗ ಅವುಗಳನ್ನು ಮಾರುಕಟ್ಟೆಯಿಂದ ಹಿಂಪಡೆಯುವ, ಮಾರಾಟ ತಡೆಹಿಡಿಯುವಲ್ಲಿ ತನಿಖೆ ಕ್ಷಿಪ್ರಗತಿಯಲ್ಲಿ ಮಾಡಲು ಸಂಚಾರಿ ದೂರವಾಣಿ ಅವಶ್ಯಕತೆ ಇರುತ್ತದೆ. ಹಾಗೂ ಇಲಾಖೆಯ ಕಾರ್ಯವೈಖರಿಯನ್ನು ಮತ್ತಷ್ಟು ಚುರುಕುಗೊಳಿಸಲು ಈ ಇಲಾಖೆಯ ಎಲ್ಲಾ ಅಮಲುಜಾರಿ ಅಧಿಕಾರಿಗಳಿಗೆ ಸಂಚಾರಿ ದೂರವಾಣಿಯನ್ನು ಒದಗಿಸಲು ಅನುಮತಿಯನ್ನು ನೀಡಿ ಹಾಗೂ ಪ್ರತಿ ಹ್ಯಾಂಡ್ ಸೆಟ್‌ಗೆ ಅಂದಾಜು ರೂ. 4,000/–ರಂತೆ 113 ಹ್ಯಾಂಡ್ ಸೆಟ್‌ಗಳಿಗೆ ಒಟ್ಟು ವೆಚ್ಚ ರೂ. 4,52,000/–ಗಳು ಮತ್ತು ತೆರಿಗೆ ಸೇರಿ ಮಾಸಿಕ ವೆಚ್ಚ ರೂ. 1,000/–ಗಳಿಗೆ ಸೀಮಿತಗೊಳಿಸಿ ಈ ಸಂಬಂಧ ವೆಚ್ಚವನ್ನು ಲೆಕ್ಕಶೀರ್ಷಿಕೆ 2210–06–104–0–01 (ಯೋಜನೆ) 152–ದೂರವಾಣಿ ವೆಚ್ಚಗಳ ಅಡಿಯಲ್ಲಿ ಭರಿಸಲು ಅನುಮತಿಸಬೇಕೆಂದು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 136 ಐಎಂಎಂ 2013, ಬೆಂಗಳೂರು, ದಿನಾಂಕ: 4ನೇ ಜೂನ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಔಷಧ ನಿಯಂತ್ರಣ ಇಲಾಖೆಯ ಅಮಲುಜಾರಿ ವಿಭಾಗದ ಈ ಕೆಳಕಂಡ ಅಧಿಕಾರಿಗಳಿಗೆ ಸಂಚಾರಿ ದೂರವಾಣಿ ಒದಗಿಸುವ ಬದಲು ಕೆಳಕಂಡಂತೆ ಮಾಸಿಕ ಮೊಬೈಲ್ ಬಿಲ್ ಮರುಪಾವತಿ ಸೌಲಭ್ಯ ಒದಗಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ಮಾಸಿಕ ಮರುಪಾವತಿ | ಒಟ್ಟು ವಾರ್ಷಿಕ |
|---|---|---|---|---|
| 1 | ಅಪರ ಔಷಧ ನಿಯಂತ್ರಕರು | 01 | ರೂ. 1000/– | ರೂ. 12,000/– |
| 2 | ಉಪ ಔಷಧ ನಿಯಂತ್ರಕರು | 07 | ರೂ. 750/– | ರೂ. 63,000/– |
| 3 | ಸಹಾಯಕ ಔಷಧ ನಿಯಂತ್ರಕರು | 38 | ರೂ. 500/– | ರೂ. 2,28,000/– |
| 4 | ಔಷಧ ಪರಿವೀಕ್ಷಕರು | 49 | ರೂ. 500/– | ರೂ. 2,94,000/– |
| 5 | ಮುಖ್ಯ ವೈಜ್ಞಾನಿಕ ಅಧಿಕಾರಿಗಳು, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು, ಬಳ್ಳಾರಿ ಮತ್ತು ಹುಬ್ಬಳ್ಳಿ | 04 | ರೂ. 500/– | ರೂ. 24,000/– |
| | **ಒಟ್ಟು** | **99** | | **ರೂ. 6,21,000/–** |

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2210–06–104–0–01 (ಯೋಜನೆ) 152–ದೂರವಾಣಿ ವೆಚ್ಚಗಳ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 33 ವೆಚ್ಚ–5/2014 ದಿನಾಂಕ: 29–05–2014ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ,**

**PR 474**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಆಕುಕ 461 ಸಿಜಿಇ 2013, ಬೆಂಗಳೂರು, ದಿನಾಂಕ: 29ನೇ ಮೇ, 2014**

**ವಿಷಯ :** ವಿಧಾನ ಸೌಧ, ವಿಕಾಸ ಸೌಧ ಇವುಗಳನ್ನು ಒಳಗೊಂಡಂತೆ ರಾಜ್ಯದ ಎಲ್ಲಾ ಸಾರ್ವಜನಿಕ ಆಡಳಿತ ಕಛೇರಿ/ಕಟ್ಟಡಗಳನ್ನು "ತಂಬಾಕು ಮುಕ್ತ ಸಾರ್ವಜನಿಕ ಕಟ್ಟಡಗಳು" ಎಂದು ಘೋಷಿಸುವ ಬಗ್ಗೆ

- ತಂಬಾಕು ಸೇವನೆಯು ಹಲವಾರು ದೀರ್ಘ ಆರೋಗ್ಯ ಸಮಸ್ಯೆಗಳಿಗೆ ಮುಖ್ಯ ಕಾರಣವಾಗಿದ್ದು, ಸಾರ್ವಜನಿಕರ ಆರೋಗ್ಯ ಸಂರಕ್ಷಣೆ ಮಾಡುವುದು ಅವಶ್ಯಕವಾಗಿದೆ. ಆದ್ದರಿಂದ, ಸಾರ್ವಜನಿಕ ಆಡಳಿತ ಕಟ್ಟಡಗಳಲ್ಲಿ/ಆವರಣದಲ್ಲಿ ಸಿಗರೇಟು ಮತ್ತು ಇತರೆ ತಂಬಾಕು ಪದಾರ್ಥಗಳ ಸೇವನೆಯನ್ನು ನಿಷೇಧ ಮಾಡಲು ಉದ್ದೇಶಿಸಿದೆ.
- ಸಿಗರೇಟು ಮತ್ತು ಇತರೆ ತಂಬಾಕು ಉತ್ಪನ್ನಗಳ (ಜಾಹೀರಾತು ನಿಷೇಧ ಹಾಗೂ ವ್ಯಾಪಾರ, ವಾಣಿಜ್ಯ ಉತ್ಪಾದನೆ, ಸರಬರಾಜು ಮತ್ತು ವಿತರಣೆಯ ನಿಬಂಧನೆ) ಕಾಯ್ದೆ 2003ರ (COTPA-2003) ಸೆಕ್ಷನ್ 4ರ ಪ್ರಕಾರ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ನಿಷೇಧ ನಿಯಮಗಳು 2008ರ ನಿಯಮ 2 ಮತ್ತು 3 ಪ್ರಕಾರ ಸರ್ಕಾರಿ ಆಡಳಿತ ಕಟ್ಟಡಗಳು ಮತ್ತು ಆವರಣದಲ್ಲಿ ಧೂಮಪಾನ ಮಾಡುವುದು ಅಪರಾಧವಾಗಿರುತ್ತದೆ. ಭಾರತೀಯ ದಂಡ ಸಂಹಿತೆ ಕಲಂ 268 ಮತ್ತು 290ರ ಪ್ರಕಾರ ತಂಬಾಕು ಸೇವನೆ **"ಪಬ್ಲಿಕ್ ನ್ಯೂಸೆನ್ಸ್" (ಸಾರ್ವಜನಿಕರಿಗೆ ಕೆಡಕು)** ಎಂದು ಪರಿಗಣಿಸಬಹುದಾಗಿರುತ್ತದೆ. ಆದ್ದರಿಂದ ವಿಧಾನ ಸೌಧ, ವಿಕಾಸ ಸೌಧ ಇವುಗಳನ್ನು ಒಳಗೊಂಡಂತೆ ರಾಜ್ಯದ ಎಲ್ಲಾ ಸಾರ್ವಜನಿಕ ಆಡಳಿತ ಕಛೇರಿಗಳನ್ನು **"ತಂಬಾಕು ಮುಕ್ತ ಕಛೇರಿ/ಕಟ್ಟಡಗಳು"** ಎಂದು ಘೋಷಿಸಲಾಗಿದೆ.
- ಈ ತಂಬಾಕು ಮುಕ್ತ ಸಾರ್ವಜನಿಕ ಕಟ್ಟಡಗಳಲ್ಲಿ ತಂಬಾಕು ಸೇವನೆ ನಿಷೇಧಿಸಿರುವ ಆದೇಶವನ್ನು ಉಲ್ಲಂಘಿಸಿ ಯಾರಾದರೂ ಧೂಮಪಾನ ಅಥವಾ ತಂಬಾಕುಯುಕ್ತ ಉತ್ಪನ್ನಗಳ ಸೇವನೆ ಮಾಡಿದಲ್ಲಿ ಅಂತಹವರು (COTPA-2003) ರ ಸೆಕ್ಷನ್ 21ರ ಅನ್ವಯ ಅಥವಾ ಭಾರತೀಯ ದಂಡ ಸಂಹಿತೆ ಕಲಂ 268 ಮತ್ತು 290ರ ಪ್ರಕಾರ ರೂ. 200.00 ವರೆಗೆ ದಂಡನೆಗೆ ಒಳಗಾಗುತ್ತಾರೆ.
- ಈ ಆದೇಶಕ್ಕೆ ಸಂಬಂಧಿಸಿದಂತೆ ಪ್ರತಿ ಕಟ್ಟಡದ ಅಂತಸ್ತಿನ ಮುಖ್ಯ ಪ್ರವೇಶ ದ್ವಾರಗಳಲ್ಲಿ, ಕಛೇರಿಯ ಮುಖ್ಯಸ್ಥರು ನಾಮಫಲಕಗಳನ್ನು ಹಾಕಲು ಕ್ರಮ ತೆಗೆದುಕೊಳ್ಳಬೇಕಾಗಿರುತ್ತದೆ.

**ಎನ್. ಶಿವಶೈಲಂ,**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## HEALTH AND FAMILY WELFARE SECRETARIAT

**Circular**

**No. HFW 461 CGE 2013, Bangalore, Dated: 29-05-2014**

**Sub :** Regarding declaration of all Government Offices/Buildings in Karnataka including Vidhana Soudha and Vikasa Soudha as "Tobacco Free Government Offices/Buildings".

Tobacco consumption is a major risk factor for various health problems and it is necessary to safeguard the health of the people. Hence it is intended that all Government Offices/Buildings shall be made **"Tobacco-Free"** by prohibiting smoking and consumption of all forms of tobacco products.

As per section 4 of Cigarettes and other Tobacco Products (Prohibition of Advertisement and Regulation of Trade and Commerce, Production, Supply and Distribution )Act, 2003, and Prohibition of Smoking in Public Places Rules (2&3), 2008, smoking in Government Offices/Buildings is an offence. As per Section 268 and 290 of Indian Penal Code, tobacco consumption shall be considered as **"Public Nuisance".** Hence. all Government Offices/Buildings in Karnataka including Vidhana Soudha and Vikasa Soudha are declared as **``Tobacco-Free."**

Any person violating the orders of **"Tobacco-Free"** Government Offices/Buildings by smoking or consuming tobacco products shall be penalized up to Rs.200.00 as per Section 21 of Cigarettes and other Tobacco products (Prohibition of Advertisement and Regulation of Trade, Commerce, Production, Supply and Distribution) Act, 2003 or as per Section 268 and 290 of Indian Penal Code or with both.

The Head or in-charge person of the Office shall take measures to display the necessary boards at the entrance of each floor of the Office/Building.

**N. SIVASAILAM,**
Principal Secretary to Government
Health and Family Welfare Department

**PR 475**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಲೋಕೋಪಯೋಗಿ ಇಲಾಖೆಗೆ ಸೇರಿದ ಮಳವಳ್ಳಿ ತಾಲ್ಲೂಕು ಮಾರೇಹಳ್ಳಿ ಗ್ರಾಮದ ಸರ್ವೆ ನಂ. 593ಎ, ಬಿ & ಸಿ ರಲ್ಲಿನ 3.28 ಎಕರೆ ಜಮೀನು ಹಾಗೂ ಕಟ್ಟಡವನ್ನು ಆದರ್ಶ ಶಾಲೆ ಕಟ್ಟಡಕ್ಕಾಗಿ ಶಿಕ್ಷಣ ಇಲಾಖೆಗೆ ನೀಡುವ ಕುರಿತು

**ಓದಲಾಗಿದೆ :**
1) ಮುಖ್ಯ ಇಂಜಿನಿಯರ್, ಸಂಪರ್ಕ & ಕಟ್ಟಡ (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಅ/ಸಂಕದ/ಸಇ-3/2012-13, ದಿನಾಂಕ: 26-02-2013
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಅ.ಸ. ಪತ್ರ ಸಂಖ್ಯೆ: ಆರ್‌ಎಂಎಸ್‌ಎ/ಎವಿ/ಮಳವಳ್ಳಿ ನಿವೇಶನ/06/2013-14, ದಿನಾಂಕ: 28-08-2013
3) ಮುಖ್ಯ ಇಂಜಿನಿಯರ್ ಸಂಪರ್ಕ & ಕಟ್ಟಡ (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಅ/ಸಂಕದ/ಕನಿಶಾ/ಸಇ-3/2013-14, ದಿನಾಂಕ: 06-06-2013

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ & ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಲೋಕೋಪಯೋಗಿ ಇಲಾಖೆಗೆ ಸೇರಿದ ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕು ಮಾರೇಹಳ್ಳಿ ಗ್ರಾಮದ ಸರ್ವೆ ನಂ. 593ಎ, ಬಿ & ಸಿ ರಲ್ಲಿ ಒಟ್ಟು 3.28 ಎಕರೆ ಜಮೀನನ್ನು ಆದರ್ಶ ಶಾಲೆಗೆ ಕಟ್ಟಡಕ್ಕಾಗಿ ಶಿಕ್ಷಣ ಇಲಾಖೆಗೆ ಹಸ್ತಾಂತರ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (2)ರ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ), ಇವರು ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ 2009-10ರಲ್ಲಿ ಶೈಕ್ಷಣಿಕವಾಗಿ ಹಿಂದುಳಿದ 74 ತಾಲ್ಲೂಕುಗಳಿಗೆ ಪ್ರತಿ ತಾಲ್ಲೂಕಿಗೆ ಒಂದರಂತೆ ಮಾದರಿ ಶಾಲೆಗಳು ಮಂಜೂರಾಗಿರುತ್ತದೆ. ಅದರಂತೆ ಮಳವಳ್ಳಿ ತಾಲ್ಲೂಕಿಗೆ ಈ ಶಾಲೆ ಮಂಜೂರಾಗಿರುತ್ತದೆ. ಇಂತಹ ಶಾಲೆಗಳನ್ನು ಕರ್ನಾಟಕದಲ್ಲಿ ಆದರ್ಶ ವಿದ್ಯಾಲಯ ಎಂದು ಕರೆಯಲಾಗುತ್ತಿದೆ. ಈ ಆದರ್ಶ ವಿದ್ಯಾಲಯಗಳ ಕಟ್ಟಡವನ್ನು ಕೇಂದ್ರೀಯ ವಿದ್ಯಾಲಯಗಳ ಮಾದರಿಯಲ್ಲಿ ನಿರ್ಮಾಣ ಮಾಡುತ್ತಿದ್ದು, ಇದಕ್ಕಾಗಿ ಸುಮಾರು 4 ಕೋಟಿ ರೂ.ಗಳು ವೆಚ್ಚವಾಗುತ್ತದೆ. ಈ ಶಾಲೆಗಳು 6 ರಿಂದ 12ನೇ ತರಗತಿವರೆಗೆ ಶಿಕ್ಷಣವನ್ನು ಒದಗಿಸಲಾಗುತ್ತಿದೆ. ಆದ್ದರಿಂದ ಮಂಡ್ಯ ಜಿಲ್ಲೆ ಮಳವಳ್ಳಿ ತಾಲ್ಲೂಕಿನ ಮಾರೇಹಳ್ಳಿ ಗ್ರಾಮದ ಸರ್ವೆ ನಂ. 593 ಎ, ಬಿ. ಸಿಯಲ್ಲಿನ ಒಟ್ಟು 3.28 ಎಕರೆ ಜಮೀನನ್ನು ಕೇಂದ್ರ ಪುರಸ್ಕೃತ ಯೋಜನೆಯಡಿಯಲ್ಲಿ ಮಂಜೂರಾಗಿರುವ ಆದರ್ಶ ವಿದ್ಯಾಲಯ ಕಟ್ಟಡ ನಿರ್ಮಾಣಕ್ಕಾಗಿ ಶಿಕ್ಷಣ ಇಲಾಖೆಗೆ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ & ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಮೇಲ್ಕಾಣಿಸಿದ ಸರ್ವೆ ನಂ. ನಲ್ಲಿರುವ ಕಟ್ಟಡ ಹಾಗೂ ಭೂಮಿಯನ್ನು ಲೋ.ಇ.ಗೆ ಕುಡಿಯುವ ನೀರು ಸರಬರಾಜು ಮಾಡುವ ಸಲುವಾಗಿ ಉಪಯೋಗಿಸಿಕೊಳ್ಳಲು ಉದ್ದೇಶಿಸಲಾಗಿತ್ತು. ಆದರೆ ಕುಡಿಯುವ ನೀರಿನ ಸರಬರಾಜಿನ ವ್ಯವಸ್ಥೆಯನ್ನು ಪುರಸಭೆ ಮೂಲಕ ಈಗಾಗಲೇ ಮಾಡಿರುವ ಹಿನ್ನೆಲೆಯಲ್ಲಿ ಸದರಿ ಕಟ್ಟಡ ಹಾಗೂ ಖಾಲಿಯಿರುವ ಪ್ರದೇಶವು ಲೋಕೋಪಯೋಗಿ ಇಲಾಖೆಗೆ ಅವಶ್ಯಕತೆಯಿರುವುದಿಲ್ಲ. ಸದರಿ ಜಾಗದಲ್ಲಿನ ಕಟ್ಟಡವು ತುಂಬಾ ಶಿಥಿಲವಾಗಿ ಬೀಳುವ ಸ್ಥಿತಿಯಲ್ಲಿರುತ್ತದೆಂದು ಹಾಗೂ 3 ಎಕರೆ 28 ಗುಂಟೆ (1,61,172.00 ಚ.ಅಡಿ) ಜಮೀನಿನ ಮೌಲ್ಯವು (ಪ್ರತಿ ಚ.ಅ.ಗೆ ರೂ. 150.00 ರಂತೆ) ಒಟ್ಟು ರೂ. 2,41,75,800.00ಗಳಾಗುತ್ತದೆಂದು ತಿಳಿಸಿರುತ್ತಾರೆ.

ಈ ಪ್ರಸ್ತಾವನೆ ಕುರಿತು ಕಂದಾಯ ಇಲಾಖೆ ಹಾಗೂ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಸಚಿವ ಸಂಪುಟದ ಅನುಮೋದನೆ ಪಡೆದಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 147 ಬಿಎಂಎಸ್ 2013, ಬೆಂಗಳೂರು, ದಿನಾಂಕ: 27ನೇ ಮೇ, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗೆ ಸೇರಿದ ಮಳವಳ್ಳಿ ತಾಲ್ಲೂಕು ಮಾರೇಹಳ್ಳಿ ಗ್ರಾಮದ ಸರ್ವೆ ನಂ. 593ಎ, ಬಿ & ಸಿ ರಲ್ಲಿನ ಒಟ್ಟು 3.28 ಎಕರೆ ಜಮೀನು ಹಾಗೂ ಕಟ್ಟಡವನ್ನು ಆದರ್ಶ ಶಾಲೆ ಕಟ್ಟಡ ನಿರ್ಮಾಣಕ್ಕಾಗಿ ಉಚಿತವಾಗಿ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ಸರ್ಕಾರವು ಅನುಮೋದನೆ ನೀಡಲಾಗಿದೆ.

ಮುಖ್ಯ ಇಂಜಿನಿಯರ್ ಸಂಪರ್ಕ & ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಜಾಗವನ್ನು ಹಸ್ತಾಂತರಿಸಲು ಮೇಲ್ಕಾಣಿಸಿದ ಆದೇಶದಂತೆ ಸೂಕ್ತ ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಕಟ್ಟಡಗಳು)

**PR 476**

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಇ 19 ರಾಲೆಪ 2014, ಬೆಂಗಳೂರು, ದಿನಾಂಕ: 20ನೇ ಮೇ, 2014**

ಕರ್ನಾಟಕ ರಾಜ್ಯ ಲೆಕ್ಕಪತ್ರ ಸೇವೆಗಳು (ನೇಮಕಾತಿ) ನಿಯಮಗಳು, 2011 ಹೊರಡಿಸಿದ ನಂತರ ಹೊಸದಾಗಿ ಮಂಜೂರಾದ ಹುದ್ದೆಗಳನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ವೃಂದ ಬಲಕ್ಕೆ ಸೇರ್ಪಡೆ ಮಾಡಿ ಹೊರಡಿಸಲಾದ ದಿನಾಂಕ: 22–03–2014ರ ಸಮ ಸಂಖ್ಯೆ ಸರ್ಕಾರಿ ಆದೇಶದ ಆದೇಶ ಭಾಗದಲ್ಲಿ **"155 ಹುದ್ದೆಗಳನ್ನು"** ಎಂದಿರುವುದನ್ನು **"158 ಹುದ್ದೆಗಳನ್ನು"** ಎಂದು ಹಾಗೂ ಅನುಬಂಧ–4ರ ಕ್ರಮ ಸಂಖ್ಯೆ: 9 ರಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ಇಲ್ಲಿ **"ಸೃಜನೆಯಾದ ಹುದ್ದೆಗಳ ಸಂಖ್ಯೆ 1"** ಎಂದಿರುವುದನ್ನು **"ಸೃಜನೆಯಾದ ಹುದ್ದೆಗಳ ಸಂಖ್ಯೆ 5"** ಎಂದು ಮತ್ತು ಕ್ರಮ ಸಂಖ್ಯೆ: 10ರಲ್ಲಿ ನಗರ ಭೂ ಸಾರಿಗೆ ನಿರ್ದೇಶನಾಲಯಕ್ಕೆ **"ಸೃಜನೆಯಾದ ಹುದ್ದೆಗಳ ಸಂಖ್ಯೆ 5"** ಎಂದಿರುವುದನ್ನು **"ಸೃಜನೆಯಾದ ಹುದ್ದೆಗಳ ಸಂಖ್ಯೆ 1"** ಎಂದು ದಿನಾಂಕ: 22–03–2014ರಿಂದಲೇ ಜಾರಿಯಲ್ಲಿದ್ದಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**PR 477**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 18 ಭೂದಾಸ 2013, ಬೆಂಗಳೂರು, ದಿನಾಂಕ: 28ನೇ ಮೇ, 2014**

**ವಿಷಯ :** ನಗರಮಾಪನಕ್ಕೆ ಸಂಬಂಧಪಟ್ಟಂತೆ ಹಾಲಿ ಚಾಲ್ತಿಯಿರುವ ಯುಪಿಓಆರ್ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಗುತ್ತಿರುವ ಪಿ.ಆರ್. ಕಾರ್ಡ್ ದಾಖಲೆಯೊಂದಿಗೆ ಸಾರ್ವಜನಿಕರಿಗೆ ವಿತರಿಸಲು ಸಾರಾಂಶ ಹೊಂದಿರುವ ಪಿ.ಆರ್. ಕಾರ್ಡ್‌ನ್ನು ಸಹ ಸಿದ್ಧಪಡಿಸಿ ವಿತರಿಸುವ ಬಗ್ಗೆ

ರಾಜ್ಯದ ಆಯ್ದ 5 ನಗರಾಸ್ತಿಗಳನ್ನು ಅಳತೆ ಮಾಡಿ ಹಕ್ಕು ದಾಖಲೆಗಳನ್ನು ತಯಾರಿಸುವ (ಯು.ಪಿ.ಓ.ಆರ್.) ಯೋಜನೆಯು ಜಾರಿಯಲ್ಲಿದ್ದು, ಆಸ್ತಿಧಾರಕರಿಗೆ 6 ರಿಂದ 8 ಪುಟಗಳ ವಿವರವಾದ ಮಾಹಿತಿಯನ್ನು ಒಳಗೊಂಡ/ಪಿ.ಆರ್. ಕಾರ್ಡ್‌ನ್ನು ಒದಗಿಸಲು ದಿನಾಂಕ: 14–06–2012ರಲ್ಲಿ ಅಂತಿಮ ಅಧಿಸೂಚನೆ ಹೊರಡಿಸಿ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿರುತ್ತದೆ. ಸದರಿ ಪಿ.ಆರ್. ಕಾರ್ಡ್ ಜೊತೆಗೆ ಕೆಲವು ಅತೀ ಮುಖ್ಯ ಅಂಶಗಳಾದ ಆಸ್ತಿಯ ಸಂಖ್ಯೆ, ಮಾಲೀಕರ ಹೆಸರು, ಆಸ್ತಿಯ ಸ್ವರೂಪ, ವಿಸ್ತೀರ್ಣ, ನಕ್ಷೆ ಮತ್ತು ಅಳತೆಯನ್ನು ಹೊಂದಿರುವ ಪಿ.ಆರ್. ಕಾರ್ಡ್‌ನ್ನು ವಿತರಿಸುವುದು ಸಹ ಸೂಕ್ತವೆಂದು ತೀರ್ಮಾನಿಸಿರುವುದರಿಂದ ನಗರ ಆಸ್ತಿ ಹೊಂದಿರುವ ಸಾರ್ವಜನಿಕರಿಗೆ ಒಂದೇ ಪುಟದಲ್ಲಿ ಸಾರಾಂಶ ಹೊಂದಿರುವ ಕನ್ನಡ ಮತ್ತು ಆಂಗ್ಲ ಭಾಷೆಯ ಪಿ.ಆರ್. ಕಾರ್ಡ್‌ನ್ನು ಒದಗಿಸುವ ಸಲುವಾಗಿ ಪ್ರತ್ಯೇಕ ನಮೂನೆಗಳನ್ನು ದಿನಾಂಕ: 17–01–2014ರಂದು ಪ್ರಕಟಿಸಿದ್ದು ಈ ನಮೂನೆಗಳ ಬಗ್ಗೆ ಯಾವುದೇ ಆಕ್ಷೇಪಣೆಗಳಿದ್ದಲ್ಲಿ, ಅವುಗಳು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿಗಳು (ಭೂಮಿ & ಯು.ಪಿ.ಓ.ಆರ್.) ಕಂದಾಯ ಇಲಾಖೆ ರವರಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಈ ಅಧಿಸೂಚನೆಯು ದಿನಾಂಕ: 27–02–2014ರಂದು ಪ್ರಕಟಗೊಂಡಿರುತ್ತದೆ. ಈ ನಮೂನೆಗಳ ಬಗ್ಗೆ ಯಾವುದೇ ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಅದರಂತೆ, ಈ ಅಧಿಸೂಚನೆಯ ಮೂಲಕ ಪ್ರಕಟಿಸಲಾಗಿರುವ ಆಸ್ತಿ ಪ್ರಕಟಣಾ ಪತ್ರದ ವಿವಿಧ ನಮೂನೆಗಳನ್ನು ಅಂತಿಮಗೊಳಿಸಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರೇವಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ) (ಪ್ರ)

GOVERNMENT OF KARNATAKA

Town

Ward No:

Ward Name:

UPOR Number :

REVENUE DEPARTMENT

ಕಂದಾಯ ಇಲಾಖೆ

URBAN PROPERTY OWNERSHIP RECORD

## URBAN PROPERTY OWNERSHIP RECORD (Summary)

**PROPERTY OWNERSHIP CERTIFICATE ISSUED PURSUANT TO RULE 83(2) OF CHAPTER XII OF THE KARNATAKA LAND REVENUE RULES 1966**

| | | | | |
|---|---|---|---|---|
| 1. Property Details | Property Type : | Mutation Number: | PLOT/FLAT Area: Sq.mtrs | |
| 2. Ownership Details | Owner Name | | Identification Certificate No<br>UID No: | |
| | Document Type: | Document Number: | Date of Registration: | |
| 3. Lease Details | Name of Lessee: | Lease Period | | |
| | | From: | To | |
| 4. Security/Encumbrance Details | Bank Name: | Amount: | Duration: | |
| 5. Easement Rights | | | | |
| 6. Remarks | | | | |

MAP




**Remarks :** 1. This is digitally signed document does not need manual signature. 2. Barcode contains the digital information, don't damage it.

Date of Printing

GOVERNMENT OF KARNATAKA
ಕರ್ನಾಟಕ ಸರ್ಕಾರ

ನಗರ :
ವಾರ್ಡ್ ಸಂಖ್ಯೆ :
ವಾರ್ಡ್ ಹೆಸರು :

ಯುಪಿಓಆರ್ ಸಂಖ್ಯೆ :

REVENUE DEPARTMENT
ಕಂದಾಯ ಇಲಾಖೆ

## URBAN PROPERTY OWNERSHIP RECORD

## ನಗರ ಆಸ್ತಿ ಮಾಲೀಕತ್ವದ ದಾಖಲೆ (ಸಂಕ್ಷಿಪ್ತ)

**ಆಸ್ತಿ ಮಾಲೀಕತ್ವದ ದಾಖಲೆಯನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966 ರ ನಿಯಮ-83(2) , ಅಧ್ಯಾಯ XII ರ ಮೇರೆಗೆ ವಿತರಿಸಲಾಗಿದೆ**

| | | | | |
|---|---|---|---|---|
| 1. | ಆಸ್ತಿ ವಿವರಗಳು | ಆಸ್ತಿಯ ಸ್ವರೂಪ : | ಮ್ಯುಟೇಷನ್ ಸಂಖ್ಯೆ: | ಆಸ್ತಿಯ/ಅಪಾರ್ಟ್ ಮೆಂಟ್ ನ ವಿಸ್ತೀರ್ಣ: ………. ಚದರ ಮೀಟರ್ |
| 2. | ಮಾಲೀಕತ್ವದ ವಿವರಗಳು | ಮಾಲೀಕರ ಹೆಸರು : | ಗುರುತು ಪತ್ರದ ಸಂಖ್ಯೆ: ಯುಐಡಿ ಸಂಖ್ಯೆ: | |
| | | ದಸ್ತಾವೇಜಿನ ತರಹೆ: | ದಸ್ತಾವೇಜಿನ ಸಂಖ್ಯೆ: | ನೋಂದಣಿ ದಿನಾಂಕ: |
| 3. | ಗುತ್ತಿಗೆ ವಿವರಗಳು | ಗುತ್ತಿಗೆದಾರರ ಹೆಸರು: | ಗುತ್ತಿಗೆ ಅವಧಿ | |
| | | | ಇಂದ: | ವರೆಗೆ : |
| 4. | ಭದ್ರತೆ/ ಋಣಭಾರ ವಿವರಗಳು | ಬ್ಯಾಂಕಿನ ಹೆಸರು: | ಮೊತ್ತ : | ಅವಧಿ: |
| 5. | ಅನುಭೋಗದ ಹಕ್ಕುಗಳು | | | |
| 6. | ಷರಾ | | | |

### ನಕ್ಷೆ




ಷರಾ : 1. ಇದು ಡಿಜಿಟಲ್ ಸಹಿಯಾದ ದಾಖಲೆ, ಸಹಿಯ ಅವಶ್ಯಕತೆ ಇರುವುದಿಲ್ಲ . 2. ಬಾರ್ ಕೋಡಿನಲ್ಲಿ ಡಿಜಿಟಲ್ ಸಹಿ ಇರುವುದರಿಂದ ವಿರೂಪಗೊಳಿಸಬಾರದು.
3. ಕೋರಿಕೆ ಮೇರೆಗೆ ಈ ದಾಖಲೆಯನ್ನು ಆಂಗ್ಲ ಭಾಷೆಯಲ್ಲಿ ಒದಗಿಸಲಾಗುವುದು.

ಮುದ್ರಣ ದಿನಾಂಕ : ……………………

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರೇವಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ) (ಪ್ರ)

PR 481
SC-100

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## HEALTH AND FAMILY WELFARE SECRETARIAT

**Sub:** Regarding Constitution of the Committee for appiontment of Vice Chancellor, RGUHS, Bangalore.

**PREAMBLE:**

Dr.K.S. Sriprakash, Vice-Chancellor, RGUHS demits office on 13-07-2014 at the end of his tenure. Section 12(3) of the Rajiv Gandhi University of Health Sciences (Amendment) Act, 2013 provides for constitution of a Search Committee comprising of three members. one each nominated by the Chancellor, Syndicate of the University and the State Government respectively.

The Chancellor of the University, the Syndicate of the university and the State Government have recommended their nominees. The Government has considered the nomininations and decided on the nominee of the state government to be the Chairman of the Search Committee. Hence the following order.

**Government Order No. HFW 174. RGU 2014, Bangalore, Dated: 27-06-2014**

The Search Committee shall be as follows:

| | | | |
|---|---|---|---|
| 1. | Dr.C.N. Manjunath,<br>Director,<br>Sri Jayadeva Institute of Cardiovascular Sciences and Research, Jayanagar 9th Block, Bannerghatta Road, Bangalore-560 069. | State Government Nominee | Chairman |
| 2. | Dr. Mayil Vahanan Natarajan,<br>M.S.Orth,<br>M.N. Orthopaedic Hospital, Kilpauk, Chennai. | Nominee of the Chancellor | Member |
| 3. | Dr. P. Satish Chandra,<br>Director/Vice-Chancellor,<br>NIMHANS, Hosur Road, Bangalore-560 029. | Nominee of the Syndicate | Member |
| 4. | The Principal Secretary,<br>Health and Family welfare Department<br>(Medical Education), Vikasa Soudha, Bangalore. | | Convenor |

By Order and in the name of the Governor of Karnataka

**MAHABOOB KHAN**
Under Secretary to Government,
Health and Family Welfare Department,
(Medical Education)

**P.R. 543**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59